

# ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಶ್ರೀ ಹೆಚ್.ಎಂ. ರಮೇಶ್ ಗೌಡ (ವಿಧಾನಸಭೆಯಿಂದ ಚುನಾಯಿತರಾದವರು)

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 1954

ಉತ್ತರಿಸಬೇಕಾದ ದಿನಾಂಕ : 16.03.2022.

ಉತ್ತರಿಸಬೇಕಾದ ಸಚಿವರು : ಮಾನ್ಯ ಪಶುಸಂಗೋಪನೆ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಈವರೆವಿಗೂ ಉಚಿತವಾಗಿ ದೊರೆಯುತ್ತಿದ್ದ ಪಶು ವೈದ್ಯಕೀಯ ಸೇವೆಗಳಿಗೆ ದರ ನಿಗದಿ ಮಾಡುವ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ; | ರಾಜ್ಯದಲ್ಲಿ ಈವರೆವಿಗೂ ಉಚಿತವಾಗಿ ದೊರೆಯುತ್ತಿದ್ದ ಪಶುವೈದ್ಯಕೀಯ ಸೇವೆಗಳಿಗೆ ದರನಿಗದಿ ಮಾಡುವ ಪ್ರಸ್ತಾವನೆಯು ಸರ್ಕಾರದ ಮುಂದಿರುವುದಿಲ್ಲ.<br>ಆದರೆ, ಸಾಕು ಪ್ರಾಣಿಗಳಾದ ಶ್ವಾನ ಮತ್ತು ಬೆಕ್ಕುಗಳಿಗೆ ಮಾತ್ರ ಉತ್ಕೃಷ್ಟ ಸೇವೆಯನ್ನು ನೀಡಲು ಜಿಲ್ಲಾ ಮಟ್ಟದ ಪಾಲಿಕ್ಲಿನಿಕ್‌ಗಳಲ್ಲಿ ಹಾಗೂ ಸೂಪರ್ ಸ್ಪೆಷಾಲಿಟಿ/ ಸ್ಪೆಷಾಲಿಟಿ ಆಸ್ಪತ್ರೆಗಳಲ್ಲಿ ಮಾತ್ರ ಶುಲ್ಕ ನಿಗಧಿಪಡಿಸಿದೆ. ಆದರೆ ರೈತರು ಸಾಕಾಣಿಕೆ ಮಾಡುವ ಕುರಿ, ಮೇಕೆ, ಎಮ್ಮೆ, ಹಸು, ದನ, ಕುಕ್ಕುಟಗಳಿಗೆ ಉಚಿತವಾಗಿ ಚಿಕಿತ್ಸೆಯನ್ನು ನೀಡಲಾಗುತ್ತಿದೆ. |
| ಆ | ಹಾಗಿದ್ದಲ್ಲಿ, ಹೈನುಗಾರಿಕೆಯನ್ನು ಜೀವನೋಪಾಯ ಉದ್ಯೋಗವನ್ನಾಗಿ ಮಾಡಿಕೊಂಡಿರುವ ರೈತಾಪಿವರ್ಗದ ಜನರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಸಂಪೂರ್ಣ ವಿವರ ನೀಡುವುದು) | ರಾಜ್ಯದ 4214 ಪಶುವೈದ್ಯಕೀಯ ಸಂಸ್ಥೆಗಳಲ್ಲಿ ಹೈನುಗಾರಿಕೆಯನ್ನು ಜೀವನೋಪಾಯ ಉದ್ಯೋಗವನ್ನಾಗಿ ಮಾಡಿಕೊಂಡಿರುವ ರೈತಾಪಿವರ್ಗದ ಜನರಿಗೆ ಉಚಿತವಾಗಿ ಚಿಕಿತ್ಸೆಯನ್ನು ನೀಡುತ್ತಿರುವುದರಿಂದ ಯಾವುದೇ ತೊಂದರೆ ಆಗಿರುವುದಿಲ್ಲ. |
| ಇ | ಕಳೆದ 3 ವರ್ಷಗಳಲ್ಲಿ ಇಲಾಖೆಯಿಂದ ಚಾಮರಾಜನಗರ ಜಿಲ್ಲೆಯಲ್ಲಿ ಹೈನುಗಾರಿಕೆ ಅಭಿವೃದ್ಧಿಗೆ ಹಾಗೂ ಈ ಉದ್ಯೋಗ ಅವಲಂಬಿತರಿಗೆ ಸರ್ಕಾರ ರೂಪಿಸಿರುವ ಯೋಜನೆಗಳು ಯಾವುವು? (ಅವುಗಳ ಅನುಷ್ಠಾನದ ಬಗ್ಗೆ ಸಂಪೂರ್ಣ ವಿವರ ನೀಡುವುದು) | **ಕಳೆದ 3 ವರ್ಷಗಳಲ್ಲಿ ಇಲಾಖೆಯಿಂದ ಚಾಮರಾಜನಗರ ಜಿಲ್ಲೆಯಲ್ಲಿ ಹೈನುಗಾರಿಕೆ ಅಭಿವೃದ್ಧಿಗೆ ಹಾಗೂ ಈ ಉದ್ಯೋಗ ಅವಲಂಬಿತರಿಗೆ ರೂಪಿಸಲಾದ ಯೋಜನೆಗಳ ವಿವರ ಈ ಕೆಳಕಂಡಂತಿದೆ.**<br>1. ಹಾಲು ಉತ್ಪಾದಕರಿಗೆ ಉತ್ತೇಜನ ಅಡಿಯಲ್ಲಿ ಹಾಲು ಉತ್ಪಾದಕರ ಸಹಕಾರ ಸಂಘಗಳಿಗೆ ಹಾಲು ಪೂರೈಸುವ ಸದಸ್ಯರಿಗೆ ಪ್ರತಿ ಹಾಲಿಗೆ ರೂ.5/- ಪ್ರೋತ್ಸಾಹಧನ ನೀಡಲಾಗುತ್ತಿದೆ.<br>2. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಫಲಾನುಭವಿಗಳಿಗೆ ಹಾಲು ಕರೆಯುವ ಯಂತ್ರ ವಿತರಿಸಲಾಗುವುದು. |

| | | |
|---|---|---|
| | | 3. ಪಶುಭಾಗ್ಯ ಯೋಜನೆಯಡಿ ಹೈನು ಘಟಕ ವಿತರಿಸಲಾಗಿದೆ.<br>4. ರಾಜ್ಯದಲ್ಲಿ ಗುರುತಿಸಲ್ಪಟ್ಟ ಸಾಂಕ್ರಾಮಿಕ ರೋಗಗಳಾದ ಕಾಲುಬಾಯಿ ಜ್ವರ, ಗಳಲೇ ರೋಗ ಮತ್ತು ಕಂದು ರೋಗದ ವಿರುದ್ಧ ಲಸಿಕೆ ಹಾಕಲಾಗುತ್ತಿದೆ.<br>5. ವಿಸ್ತರಣಾ ಘಟಕಗಳ ಬಲಪಡಿಸುವಿಕೆಯಡಿ ಮಿಶ್ರತಳಿ ಕರುಗಳ / ಜಾನುವಾರು ಪ್ರದರ್ಶನ, ಹಾಲು ಕರೆಯುವ ಸ್ಪರ್ಧೆ, ಪ್ರಾಣಿ ಜನ್ಯ ರೋಗಗಳ ಜಾಗೃತಿ ಶಿಬಿರ ರೈತರ ತರಬೇತಿ ಮತ್ತು ಪ್ರವಾಸ, ಜಿಲ್ಲಾಮಟ್ಟದ ಪಶುಮೇಳ, ಜಾನುವಾರು ಜಾತ್ರೆ, ತಾಂತ್ರಿಕ ಸಂಕಿರಣ, ಏರ್ಪಡಿಸಲಾಗುವುದು.<br>6. ಉಚಿತ ಜಾನುವಾರು ಚಿಕಿತ್ಸಾ ಶಿಬಿರಗಳನ್ನು ಏರ್ಪಡಿಸುವ ಮೂಲಕ ಜಾನುವಾರುಗಳ ಆರೋಗ್ಯ ತಪಾಸಣೆ ಮಾಡಲಾಗುತ್ತಿದೆ.<br>7. ರಾಷ್ಟ್ರೀಯ ಜಾನುವಾರು ಮಿಷನ್ (ಕೇಂದ್ರ ಪುರಸ್ಕೃತ ಯೋಜನೆ)ಯಡಿ ಜಾನುವಾರುಗಳಿಗೆ ವಿಮಾ ಸೌಲಭ್ಯ ಒದಗಿಸಲಾಗಿದೆ.<br>8. ರಾಜ್ಯದಲ್ಲಿರುವ 4214 ಪಶುವೈದ್ಯಕೀಯ ಸಂಸ್ಥೆಗಳಲ್ಲಿ ದನ ಮತ್ತು ಎಮ್ಮೆಗಳಿಗೆ ರೋಗ ತಪಾಸಣೆ, ಸೂಕ್ತ ಚಿಕಿತ್ಸೆ ಮತ್ತು ಕೃತಕ ಗರ್ಭಧಾರಣೆ ಸೌಲಭ್ಯ ಒದಗಿಸಲಾಗುತ್ತಿದೆ.<br>9. ರಾಷ್ಟ್ರೀಯ ಕೃತಕ ಗರ್ಭಧಾರಣಾ ಯೋಜನೆಯಡಿಯಲ್ಲಿ ಶೇ.50 ಕ್ಕಿಂತ ಕಡಿಮೆ ಕೃತಕ ಗರ್ಭಧಾರಣೆ ಪ್ರಗತಿಯಾಗಿರುವ ಜಿಲ್ಲೆಗಳನ್ನು ಆಯ್ಕೆ ಮಾಡಿಕೊಂಡು ಉಚಿತವಾಗಿ ಉತ್ಕೃಷ್ಟ ತಳಿಗಳ ವೀರ್ಯನಳಿಕೆಗಳನ್ನು ಉಪಯೋಗಿಸಿ ರೈತರ ಮನೆ ಬಾಗಿಲಿಗೆ ಹೋಗಿ ಕೃತಕ ಗರ್ಭಧಾರಣೆ ಸೌಲಭ್ಯ ಒದಗಿಸಲಾಗುತ್ತಿದೆ.<br>10. ಪಶುಪಾಲಕರ ಮನೆಯ ಬಾಗಿಲಲ್ಲಿ ರೋಗಗ್ರಸ್ಥ ಜಾನುವಾರುಗಳಿಗೆ ವಿಶೇಷ ತುರ್ತು ಚಿಕಿತ್ಸೆ ನೀಡಲು ಸುಸಜ್ಜಿತ ಪಶುಚಿಕಿತ್ಸಾ ಪಶುಸಂಜೀವಿನಿ ವಾಹನಗಳನ್ನು ಒದಗಿಸಲಾಗಿದೆ.<br>11. ಜಾನುವಾರುಗಳಿಗೆ 24/7 ನಿರಂತರ ಸೇವೆಯನ್ನು ಒದಗಿಸಲು ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆಯಿಂದ ಸಹಾಯವಾಣಿಯನ್ನು ಪ್ರಾರಂಭಿಸಲಾಗಿದ್ದು, ಸಹಾಯವಾಣಿ ಸಂಖ್ಯೆ 8277100200 ಮೂಲಕ ಸಂಪರ್ಕಿಸಿ ಇಲಾಖೆಯ ತಾಂತ್ರಿಕ ಸೇವೆಯನ್ನು ರೈತರು ಪಡೆಯುತ್ತಿದ್ದಾರೆ. |

**ಪಸಂಮೀ ಇ-81 ಸಲೆವಿ 2022**

(ಪ್ರಭು ಬಿ. ಚವ್ಹಾಣ್)
ಪಶುಸಂಗೋಪನೆ ಸಚಿವರು